# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಆಗಸ್ಟ್ ೨೭, ೨೦೧೫ (ಭಾದ್ರಪದ ೫, ಶಕ ವರ್ಷ ೧೯೩೭)<br>**Bangalore, Thursday, August 27, 2015 (Bhadrapada 5, Shaka Varsha 1937)** | ಸಂಚಿಕೆ ೩೫<br>**Issue 35** |
|---|---|---|

## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಟಿ.ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ, ಮೈಸೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಅಪರ ನಿಬಂಧಕರು ವಿಚಾರಣೆಗಳು–11, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಂ/ಉ.ಲೋ./ಬಿ–MYS/964/2013/ARE-11, ದಿನಾಂಕ: 14–05–2013.
2. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಂ–20/ಸಿಆರ್–07/2014/ಮೈಸೂರು, ದಿನಾಂಕ: 15–07–2014.
3. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ/(ಜಿ)ಎಂ–20/ಸಿಆರ್–07/2014/ಮೈಸೂರು, ದಿನಾಂಕ: 25–03–2015.
4. ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 07/2014ರಲ್ಲಿ ದಿನಾಂಕ: 09/06/2014ರಂದು ದಾಖಲಾದ ಪ್ರಥಮ ವರ್ತಮಾನ ವರದಿ.
5. ಕಾರ್ಯನಿರ್ವಾಹಕ ಅಧಿಕಾರಿ, ಮೈಸೂರು ಅರಮನೆ ಮಂಡಳಿ, ಮೈಸೂರು ಇವರ ಪತ್ರ ಸಂಖ್ಯೆ: ಕಾನಿಅ/ಅಮಂ/ಆವಿ/ಸಿಬ್ಬಂದಿ–01/2014–15, ದಿನಾಂಕ: 25.06.2014.
6. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಶಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ 386 ಸೇನಿಎ 2014 ದಿನಾಂಕ: 03.12.2014.

**ಪ್ರಸ್ತಾವನೆ:**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ, ಅಪರ ನಿಬಂಧಕರು, ವಿಚಾರಣೆಗಳು–11, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕರ್ನಾಟಕ ಲೋಕಾಯುಕ್ತ, ಅಧಿನಿಯಮ ಕಲಂ 9(3)(ಎ) ಅನ್ವಯ ಶ್ರೀ ಜವರಾಜು ಎಂಬವರು ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಇವರ ವಿರುದ್ಧ ಮೈಸೂರು ಅರಮನೆಯಲ್ಲಿ ಜರುಗಿಸಲಾಗಿರುವ ಚಿನ್ನದ ಲೇಪನ ಕಾಮಗಾರಿ ಹಾಗೂ ಇತರೆ ಕಾಮಗಾರಿಗಳನ್ನು ಕೈಗೊಂಡು ಹಣ ದುರುಪಯೋಗಿಸಿಕೊಂಡಿರುವ ಹಾಗೂ ಕಾನೂನು ಬಾಹಿರವಾಗಿ ಪಡೆದ ಪದೋನ್ನತಿ ಮತ್ತು ಕಾನೂನು ಬಾಹಿರವಾಗಿ ಅರಮನೆಯಲ್ಲಿ ವಿಲೀನಗೊಂಡಿರುವ ಬಗ್ಗೆ ತನಿಖೆ ನಡೆಸಿ ಸೂಕ್ತ ಕ್ರಮ ಕೈಗೊಳ್ಳುವ ಬಗ್ಗೆ ಸಲ್ಲಿಸಿರುವ ದೂರಿನ ಒಂದು ಪ್ರತಿಯನ್ನು ಮಾಹಿತಿಗಾಗಿ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಕ್ರ. ಸಂ. (2)ರಲ್ಲಿ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮಾನ್ಯ ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೆ ವಿಳಾಸಿಸಿರುವ ಪತ್ರದಲ್ಲಿ, ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ, ಮೈಸೂರು ಇವರ ಮನವಿಯನುಸಾರ, ಮೈಸೂರು ಅರಮನೆಯ ಚಿನ್ನದ ಲೇಪನ ಕಾಮಗಾರಿಗಳ ಗುತ್ತಿಗೆ ಹಾಗೂ ನಿರ್ವಹಣೆಯಲ್ಲಿ, ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮ ಉಲ್ಲಂಘನೆ ಮಾಡಿ ಅಸಮರ್ಪಕ ಕಾಮಗಾರಿಗಳನ್ನು ಜರುಗಿಸಿ ಸರ್ಕಾರದ ಸುಮಾರು 4.5 ಕೋಟಿ ರೂ. ಹಣ ದುರ್ವಿನಿಯೋಗ ಮಾಡಿರುವ ಆರೋಪದ ಬಗ್ಗೆ ಪೊಲೀಸ್ ಅಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಮೈಸೂರು ಇವರು ಪ್ರಕರಣವನ್ನು ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 07/2014 ಕಲಂ 13(1)(ಸಿ)(ಡಿ) (ii) & (iii) ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ–1988 ಮತ್ತು ಕಲಂ 420 ಐಪಿಸಿ ಅಡಿಯಲ್ಲಿ ದಾಖಲಿಸಿ ತನಿಖೆ

ಕೈಗೊಂಡಿರುವ ಬಗ್ಗೆ ತಿಳಿಸುತ್ತಾ, ಪ್ರಕರಣವು ಪ್ರಸ್ತುತ ತನಿಖಾ ಹಂತದಲ್ಲಿದ್ದು ಪ್ರಕರಣದ ಆರೋಪಿ ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ, ಮೈಸೂರು ಇವರು ಪ್ರಕರಣದ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆ ಇರುವುದರಿಂದ ಹಾಗೂ ಪ್ರಕರಣದ ಸುಗಮ ತನಿಖೆಯ ಹಿತದೃಷ್ಟಿಯಿಂದ ಸದರಿಯವರನ್ನು ಪ್ರಕರಣದ ತನಿಖೆ ಪೂರ್ಣಗೊಳ್ಳುವವರೆಗೆ ಮೈಸೂರು ಅರಮನೆ ಮಂಡಳಿ ಕಾರ್ಯವ್ಯಾಪ್ತಿಯಿಂದ ವರ್ಗಾವಣೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ: 17.07.2014ರ ಪತ್ರವನ್ನು ಉಲ್ಲೇಖಿಸಿ, "ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಇವರನ್ನು ಮೈಸೂರು ಅರಮನೆ ಮಂಡಳಿ ಕಾರ್ಯವ್ಯಾಪ್ತಿಯಿಂದ ವರ್ಗಾವಣೆ ಮಾಡಲು ಹಾಗು ಮೈಸೂರು ಅರಮನೆ ಮಂಡಳಿಯ ಉಪ ನಿರ್ದೇಶಕರ ಸ್ಥಾನಕ್ಕೆ ಕಳಂಕರಹಿತ ಸಕ್ಷಮ ಅಧಿಕಾರಿಯೊಬ್ಬರನ್ನು ನಿಯೋಜಿಸುವಂತೆ", ಕೋರಿರುತ್ತಾರೆ.

ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ: 07/2014, ದಿನಾಂಕ: 09.06.2014ರ ಅನುಸಾರ ಮೈಸೂರು ಅರಮನೆಯಲ್ಲಿ ಜರುಗಿಸಲಾಗಿರುವ ಚಿನ್ನದ ಲೇಪನ ಕಾಮಗಾರಿಗಳ ಗುತ್ತಿಗೆ ಹಾಗೂ ನಿರ್ವಹಣೆಯಲ್ಲಿ ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮಗಳನ್ನು ಉಲ್ಲಂಘನೆ ಮಾಡಿ ಅಸಮರ್ಪಕ ಕಾಮಗಾರಿಗಳನ್ನು ಜರುಗಿಸಿ ಆ ಮೂಲಕ ರಾಜ್ಯ ಸರ್ಕಾರದಿಂದ ಚಿನ್ನದ ಲೇಪನ ಕಾಮಗಾರಿಗೆ ಬಿಡುಗಡೆಯಾಗಿರುವ ಸುಮಾರು 4.5 ಕೋಟಿ ರೂಗಳಷ್ಟು ಹಣವನ್ನು ದುರ್ವಿನಿಯೋಗ ಮಾಡಿರುವ ಆರೋಪದ ಪ್ರಕರಣ ಸಂಬಂಧ ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಹಾಗೂ ಇತರೆ ನೌಕರರ ವಿರುದ್ಧ ಅಪರಾಧ ಪ್ರಕರಣದ ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಿ ತನಿಖೆ ಕೈಗೊಂಡಿರುತ್ತಾರೆ.

ಮೇಲೆ ಕ್ರ.ಸಂ. (5)ರಲ್ಲಿ ಓದಲಾದ ಪತ್ರದಲ್ಲಿ, ಕಾರ್ಯನಿರ್ವಾಹಕ ಅಧಿಕಾರಿ, ಮೈಸೂರು ಅರಮನೆ ಮಂಡಳಿ, ಮೈಸೂರು ಇವರು ಮೈಸೂರು ಅರಮನೆಯಲ್ಲಿ 2007-08ನೇ ಸಾಲಿನಿಂದ 2012-13ನೇ ಸಾಲಿನವರೆಗಿನ ಅವಧಿಯಲ್ಲಿ ಅರಮನೆಯ ಚಿನ್ನದ ಲೇಪನ ಅಳವಡಿಸಿರುವ ಕಾಮಗಾರಿಗಳ ಅಸಮರ್ಪಕ ನಿರ್ವಹಣೆ ಹಾಗೂ ಸರ್ಕಾರಿ ಹಣ ದುರುಪಯೋಗ ಪ್ರಕರಣ ಸಂಬಂಧ ಲೋಕಾಯುಕ್ತದಲ್ಲಿ ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಹಾಗೂ ಇತರೆ ನೌಕರರ ವಿರುದ್ಧ ದಾಖಲಾಗಿರುವ ಪ್ರಕರಣದ ಬಗ್ಗೆ ವರದಿ ಸಲ್ಲಿಸಿದ್ದು, ಮೈಸೂರು ಅರಮನೆ ಮಂಡಳಿಯ 2012-13ನೇ ಸಾಲಿನ ಚಿನ್ನದ ಲೇಪನ ಕಾಮಗಾರಿಯ 4 ಕೆಲಸಗಳಿಗೆ ಸಂಬಂಧಿಸಿದ (ರೂ 13.00 ಲಕ್ಷ, ರೂ 43.00 ಲಕ್ಷ, ರೂ 110.00 ಲಕ್ಷ, ರೂ 185.00 ಲಕ್ಷ ಮೊತ್ತದ), ಅಳತೆಗಳನ್ನು ದಾಖಲಿಸಿರುವ ಅಳತೆ ಪುಸ್ತಕ ಸಂಖ್ಯೆ: 3320 ಕಛೇರಿಯ ಲೆಕ್ಕ ಶಾಖೆಯಿಂದ ಕಾಣೆಯಾಗಿದ್ದು ಈ ಬಗ್ಗೆ ಪೊಲೀಸ್ ಠಾಣೆಯಲ್ಲಿ ಎಫ್.ಐ.ಆರ್. ದಾಖಲಿಸಿದ್ದು ಇಂತಹ ಬಹುಮುಖ್ಯ ದಾಖಲೆ ಕಾಣೆಯಾಗಿ 2 ತಿಂಗಳು ಕಳೆದಿದ್ದರೂ ಈ ವಿಷಯವನ್ನು ಕಾರ್ಯನಿರ್ವಾಹಕ ಅಧಿಕಾರಿಗಳ ಗಮನಕ್ಕೆ ತಂದಿರುವುದಿಲ್ಲ ಎಂಬ ಅಂಶವನ್ನು ಹಾಗೂ ಸದರಿಯವರು ದಿನಾಂಕ: 09-06-2014 ರಿಂದ 13-06-2014ರವರೆಗೆ ಅನಾರೋಗ್ಯದ ನಿಮಿತ್ತ ಸಾಂದರ್ಭಿಕ ರಜೆ ಕೋರಿದ್ದು ಇವರ ರಜೆಯನ್ನು ತಿರಸ್ಕರಿಸಲಾಗಿದ್ದರೂ ಸದರಿ ಅಧಿಕಾರಿಯವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ, ನಂತರ 19-06-2014ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ಸರ್ಕಾರ ಅವಗಾಹನೆಗೆ ವರದಿ ಸಲ್ಲಿಸಿರುತ್ತಾರೆ.

ಮೇಲೆ ಕ್ರ.ಸಂ. (6)ರಲ್ಲಿ ಓದಲಾದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಶಾಖೆಯ ಟಿಪ್ಪಣಿಯಲ್ಲಿ ಪ್ರಕರಣದ ಬಗ್ಗೆ, "ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಶಿಫಾರಸ್ಸಿನಂತೆ ಶ್ರೀ ಟಿ. ಎಸ್. ಸುಬ್ರಮಣ್ಯ ಇವರನ್ನು ಸಮಾನಾಂತರವಾದ ಇತರೆ ಯಾವುದಾದರೂ ಹುದ್ದೆಗೆ ವರ್ಗಾಯಿಸಲು/ನಿಯೋಜಿಸಲು ಆಡಳಿತ ಇಲಾಖೆಯೇ ಪರಿಶೀಲಿಸಿ ಕ್ರಮ ಕೈಗೊಳ್ಳಬಹುದಾಗಿದೆ" ಎಂದು ಅಭಿಪ್ರಾಯ ನೀಡಿರುತ್ತಾರೆ.

ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಮೈಸೂರು ಇವರ ಮೇಲೆ 2012-13ನೇ ಸಾಲಿನ ಅವಧಿಯಲ್ಲಿ ಅರಮನೆಯ ಚಿನ್ನದ ಲೇಪನ ಅಳವಡಿಸಿರುವ ಕಾಮಗಾರಿಗಳ ಅಸಮರ್ಪಕ ನಿರ್ವಹಣೆ ಹಾಗೂ ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮ ಉಲ್ಲಂಘನೆ ಮಾಡಿ ಅಸಮರ್ಪಕ ಕಾಮಗಾರಿಗಳನ್ನು ಜರುಗಿಸಿ ಸರ್ಕಾರದ ಸುಮಾರು 4.5 ಕೋಟಿ ರೂ ಹಣ ದುರ್ವಿನಿಯೋಗ ಮಾಡಿರುವ ಪ್ರಕರಣದ ಬಗ್ಗೆ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 17.07.2014ರ ಹಾಗೂ 25.03.2015ರ ಪತ್ರಗಳು ಅರಮನೆಯ ಚಿನ್ನದ ಲೇಪನ ಅಳವಡಿಸಿರುವ ಕಾಮಗಾರಿಗಳ ಅಳತೆಗಳನ್ನು ದಾಖಲಿಸಿರುವ ಬಹುಮುಖ್ಯ ದಾಖಲೆಯಾದ ಅಳತೆ ಪುಸ್ತಕ ಸಂಖ್ಯೆ: 3320 ಕಛೇರಿಯ ಲೆಕ್ಕ ಶಾಖೆಯಿಂದ ಕಾಣೆಯಾಗಿ 2 ತಿಂಗಳು ಕಳೆದಿದ್ದರೂ ಈ ವಿಷಯವನ್ನು ಕಾರ್ಯನಿರ್ವಾಹಕ ಅಧಿಕಾರಿಗಳ ಗಮನಕ್ಕೆ ತಾರದಿರುವುದು ಹಾಗೂ ದಿನಾಂಕ: 09-06-2014 ರಿಂದ 13-06-2014ರವರೆಗೆ ಅನಾರೋಗ್ಯದ ನಿಮಿತ್ತ ಸಾಂದರ್ಭಿಕ ರಜೆ ಕೋರಿದ್ದು ಇವರ ರಜೆಯನ್ನು ತಿರಸ್ಕರಿಸಲಾಗಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ನಂತರ 19-06-2014ರಂದು ಕರ್ತವ್ಯಕ್ಕೆ ಹಾಜರಾಗಿರುವ ಬಗ್ಗೆ ಕಾರ್ಯನಿರ್ವಾಹಕ ಅಧಿಕಾರಿಗಳು ಸರ್ಕಾರಕ್ಕೆ ನೀಡಿರುವ ವರದಿ, ಈ ಎಲ್ಲಾ ದಾಖಲೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಈ ಎಲ್ಲಾ ದಾಖಲೆಗಳು ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪಗಳನ್ನು ಬೆಂಬಲಿಸುತ್ತವೆ. ಹಾಗಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(3) ರನ್ವಯ ಅಧಿಕಾರಿಯವರ ವಿರುದ್ಧದ ಆರೋಪಕ್ಕೆ ಸಾಕಷ್ಟು ದಾಖಲೆಗಳು ಲಭ್ಯವಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಮೈಸೂರು ಇವರು 2012-13ನೇ ಸಾಲಿನ ಅವಧಿಯಲ್ಲಿ ಅರಮನೆಯ ಚಿನ್ನದ ಲೇಪನ ಅಳವಡಿಸಿರುವ ಕಾಮಗಾರಿಗಳ ಅಸಮರ್ಪಕ ನಿರ್ವಹಣೆ ಹಾಗೂ ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮ ಉಲ್ಲಂಘನೆ ಮಾಡಿ ಅಸಮರ್ಪಕ ಕಾಮಗಾರಿಗಳನ್ನು ಜರುಗಿಸಿ ಸರ್ಕಾರದ ಸುಮಾರು 4.5 ಕೋಟಿ ರೂ ಹಣ ದುರ್ವಿನಿಯೋಗ ಮಾಡಿರುವ ಪ್ರಕರಣದ ವರ್ತನೆಯಂತಹ ಗಂಭೀರ ಆರೋಪ ಹಾಗೂ ಮೈಸೂರು ಅರಮನೆ ಮಂಡಳಿಯ 2012-13ನೇ ಸಾಲಿನ ಚಿನ್ನದ ಲೇಪನ ಕಾಮಗಾರಿಯ 4 ಕೆಲಸಗಳಿಗೆ ಸಂಬಂಧಿಸಿದ (ರೂ. 13.00 ಲಕ್ಷ, ರೂ 43.00 ಲಕ್ಷ, ರೂ 110.00 ಲಕ್ಷ ರೂ 185.00 ಲಕ್ಷ ಮೊತ್ತದ), ಅಳತೆಗಳನ್ನು ದಾಖಲಿಸಿರುವ ಅಳತೆ ಪುಸ್ತಕ ಸಂಖ್ಯೆ: 3320 ಕಛೇರಿಯ ಲೆಕ್ಕ ಶಾಖೆಯಿಂದ ಕಾಣೆಯಾಗಿದ್ದು ಈ ಬಗ್ಗೆ ಪೊಲೀಸ್ ಠಾಣೆಯಲ್ಲಿ ಎಫ್.ಐ.ಆರ್. ದಾಖಲಿಸಿದ್ದು ಇಂತಹ ಬಹುಮುಖ್ಯ ದಾಖಲೆ ಕಾಣೆಯಾಗಿ 2 ತಿಂಗಳು ಕಳೆದಿದ್ದರೂ ಈ ವಿಷಯವನ್ನು ಕಾರ್ಯನಿರ್ವಾಹಕ ಅಧಿಕಾರಿಗಳ ಗಮನಕ್ಕೆ ತಾರದಿರುವಂತಹ ಹಾಗೂ ದಿನಾಂಕ: 09-06-2014 ರಿಂದ 13-06-2014ರವರೆಗೆ ಅನಾರೋಗ್ಯದ ನಿಮಿತ್ತ ಸಾಂದರ್ಭಿಕ ರಜೆ ಕೋರಿದ್ದು ಇವರ ರಜೆಯನ್ನು ತಿರಸ್ಕರಿಸಲಾಗಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ನಂತರ 19—06-2014ರಂದು ಕರ್ತವ್ಯಕ್ಕೆ ಹಾಜರಾಗಿರುವಂತಹ ಗಂಭೀರ ಆರೋಪಗಳು ಅಧಿಕಾರಿಯ ಮೇಲೆ ಇರುತ್ತದೆ. ಹಾಗಾಗಿ ಇವರು ಸಂಪೂರ್ಣ ನೀತಿ ನಿಷ್ಠೆಯನ್ನು, ಕರ್ತವ್ಯ ಶ್ರದ್ಧೆಯನ್ನು ಹೊಂದಿರದೇ ಮತ್ತು ಸರ್ಕಾರಿ ನೌಕರನಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತೆ ತೋರಿ ಮತ್ತು ಗಂಭೀರವಾದ ದುರ್ನಡತೆ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು, 1966ರ ನಿಯಮ 3(1) (i),(ii),(iii) ಗಳನ್ನು ಉಲ್ಲಂಘನೆ ಮಾಡಿ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ.

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 17.07.2014ರ ಹಾಗೂ 25.03.2015ರ ಪತ್ರಗಳನ್ನು ಮತ್ತು ಕಾರ್ಯನಿರ್ವಾಹಕ ಅಧಿಕಾರಿ, ಮೈಸೂರು ಅರಮನೆ ಮಂಡಳಿ, ಮೈಸೂರು ಇವರ ಪತ್ರ ಸಂಖ್ಯೆ: ಕಾನಿಅ/ಅಮಂ/ಆವಿ/

ಸಿಬ್ಬಂದಿ–01/2014–15, ದಿನಾಂಕ: 25.06.2014 ಇವುಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು, ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಇವರು 2012–13ನೇ ಸಾಲಿನ ಅವಧಿಯಲ್ಲಿ ಅರಮನೆಯ ಚಿನ್ನದ ಲೇಪನ ಅಳವಡಿಸಿರುವ ಕಾಮಗಾರಿಗಳ ಅಸಮರ್ಪಕ ನಿರ್ವಹಣೆ ಹಾಗೂ ಕೆ.ಟಿ.ಪಿ.ಪಿ. ಕಾಯ್ದೆಯ ನಿಯಮ ಉಲ್ಲಂಘನೆ ಮಾಡಿ ಅಸಮರ್ಪಕ ಕಾಮಗರಿಗಳನ್ನು ಜರುಗಿಸಿ ಸರ್ಕಾರದ ಸುಮಾರು 4.5 ಕೋಟಿ ರೂ ಹಣ ದುರ್ವಿನಿಯೋಗ ಮಾಡಿರುವ ಪ್ರಕರಣದ ವರ್ತನೆಯಂತಹ ಗಂಭೀರ ಆರೋಪ ಹಾಗೂ ಮೈಸೂರು ಅರಮನೆ ಮಂಡಳಿಯ 2012–13ನೇ ಸಾಲಿನ ಚಿನ್ನದ ಲೇಪನ ಕಾಮಗಾರಿಯ 4 ಕೆಲಸಗಳಿಗೆ ಸಂಬಂಧಿಸಿದ (ರೂ. 13.00 ಲಕ್ಷ, ರೂ 43.00 ಲಕ್ಷ ರೂ 110.00 ಲಕ್ಷ ರೂ 185.00 ಲಕ್ಷ ಮೊತ್ತದ), ಅಳತೆಗಳನ್ನು ದಾಖಲಿಸಿರುವ ಅಳತೆ ಪುಸ್ತಕ ಸಂಖ್ಯೆ: 3320 ಕಛೇರಿಯ ಲೆಕ್ಕ ಶಾಖೆಯಿಂದ ಕಾಣೆಯಾಗಿದ್ದು ಈ ಬಗ್ಗೆ ಪೊಲೀಸ್ ಠಾಣೆಯಲ್ಲಿ ಎಫ್.ಐ.ಆರ್. ದಾಖಲಿಸಿದ್ದು ಇಂತಹ ಬಹುಮುಖ್ಯ ದಾಖಲೆ ಕಾಣೆಯಾಗಿ 2 ತಿಂಗಳು ಕಳೆದಿದ್ದರೂ ಈ ವಿಷಯವನ್ನು ಕಾರ್ಯನಿರ್ವಾಹಕ ಅಧಿಕಾರಿಗಳ ಗಮನಕ್ಕೆ ತಾರದಿರುವಂತಹ ಹಾಗು ದಿನಾಂಕ: 09–06–2014 ರಿಂದ 13–06–2014ರವರೆಗೆ ಅನಾರೋಗ್ಯದ ನಿಮಿತ್ತ ಸಾಂದರ್ಭಿಕ ರಜೆ ಕೋರಿದ್ದು ಇವರ ರಜೆಯನ್ನು ತಿರಸ್ಕರಿಸಲಾಗಿದ್ದರೂ ಕರ್ತವ್ಯಕ್ಕೆ ಹಾಜರಾಗದೆ ನಂತರ 19—6–2014ರಂದು ಕರ್ತವ್ಯಕ್ಕೆ ಹಾಜರಾಗಿರುವಂತಹ ಗಂಭೀರ ಆರೋಪಗಳು ಅಧಿಕಾರಿಯ ಮೇಲೆ ಇದ್ದು ಅಧಿಕಾರಿಯವರು ಕರ್ತವ್ಯದಲ್ಲಿ ತೀವ್ರತರ ನಿರ್ಲಕ್ಷತನ ತೋರಿರುವುದು ಮೇಲ್ನೋಟಕ್ಕೆ ಖಚಿತಪಡಿಸುತ್ತದೆ. ಹಾಗಾಗಿ ಅಧಿಕಾರಿಯವರ ಅಂತಹ ವರ್ತನೆಯು ಕರ್ತವ್ಯದಲ್ಲಿ ತೀವ್ರತರ ನಿರ್ಲಕ್ಷತೆ ಎಂದು (Gross dereliction of duty) ನಿರ್ಧರಿಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1) (ಡಿ) ರಡಿಯಲ್ಲಿ ಸೇವೆಯಿಂದ ಅಮಾನತ್ತುಗೊಳಿಸಬಹುದಾದ ಪ್ರಕರಣವಾಗಿರುತ್ತದೆ.

ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಇವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(ಎ) (ii)ರ ಅನ್ವಯ ಮೈಸೂರು ಅರಮನೆ ಮಂಡಳಿಯ ಉಪ ನಿರ್ದೇಶಕರ ಹುದ್ದೆಗೆ ಶಾಶ್ವತ ವರ್ಗಾವಣೆ ಮಾಡಿ (ಸೇವಾ ವಿಲೀನಾತಿ) ಆದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ, ಸದರಿಯವರನ್ನು ಕರ್ನಾಟಕ ಲೋಕಾಯುಕ್ತರ ಮನವಿಯನುಸಾರ ಅರಮನೆ ಮಂಡಳಿ ಕಾರ್ಯವ್ಯಾಪ್ತಿಯಿಂದ ವರ್ಗಾವಣೆ ಮಾಡಲು ಸರ್ಕಾರಕ್ಕೆ ಇರುವ ಅವಕಾಶಗಳು ಕಂಡು ಬರುತ್ತಿಲ್ಲ.

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರಗಳನ್ನು ಹಾಗೂ ಅದರೊಂದಿಗಿನ ದಾಖಲೆಗಳನ್ನು ಮತ್ತು ಕಾರ್ಯನಿರ್ವಾಹಕ ಅಧಿಕಾರಿ, ಮೈಸೂರು ಅರಮನೆ ಮಂಡಳಿ, ಮೈಸೂರು ಇವರ ಪತ್ರ ಇವುಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಆರೋಪಿತ ಅಧಿಕಾರಿಯಾದ ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ ಇವರ ವಿರುದ್ಧದ ಆರೋಪವು ದಾಖಲೆಗಳ ಪರಿಶೀಲನೆಯಿಂದ ಮೇಲ್ನೋಟಕ್ಕೆ ಮನವರಿಕೆಯಾಗಿರುವುದರಿಂದ ಇವರನ್ನು ಇದೇ ಹುದ್ದೆಯಲ್ಲಿ ಮುಂದವರಿಸಿದ್ದಲ್ಲಿ, ಪ್ರಕರಣದ ಸುಗಮ ತನಿಖೆಗೆ ಅಡಚಣೆಯಾಗುವ ಹಾಗೂ ಸಾಕ್ಷ್ಯಾಧಾರಗಳನ್ನು ನಾಶಪಡಿಸುವ ಸಾಧ್ಯತೆ ಇರುವುದರಿಂದ ಅಂಥಾ ಸಂಭವವನ್ನು ತಪ್ಪಿಸುವ ದೃಷ್ಟಿಯಿಂದ, ಆರೋಪಿತ ಅಧಿಕಾರಿಯವರ ಸೇವೆಯನ್ನು ಮುಂದುವರೆಸುವುದು ಸಮಂಜಸವಲ್ಲವೆಂದು ಭಾವಿಸಿ ಸರ್ಕಾರವು ಇವರ ವಿರುದ್ಧದ ಮುಂದಿನ ತನಿಖೆ/ವಿಚಾರಣೆಯನ್ನು ಕಾಯ್ದಿರಿಸಿ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ಸೇಅವಿ 2013, ಬೆಂಗಳೂರು, ದಿನಾಂಕ: 18–05–2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕರು, ಮೈಸೂರು ಅರಮನೆ ಮಂಡಳಿ, ಮೈಸೂರು ಇವರು ಕರ್ತವ್ಯದಲ್ಲಿ ಸಂಪೂರ್ಣ ನೀತಿ ನಿಷ್ಠೆಯನ್ನು, ಕರ್ತವ್ಯ ಶ್ರದ್ಧೆಯನ್ನು ಹೊಂದಿರದೇ ಮತ್ತು ಸರ್ಕಾರಿ ನೌಕರನಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯದಲ್ಲಿ ತೀವ್ರತರವಾದ ನಿರ್ಲಕ್ಷತೆ ತೋರಿ ಮತ್ತು ಗಂಭೀರವಾದ ದುರ್ನಡತೆ ಎಸಗಿ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು, 1966ರ ನಿಯಮ 3(1) (i),(ii),(iii)ಗಳನ್ನು ಉಲ್ಲಂಘಿಸಿರುವ ಆರೋಪದ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಡಿ) ಹಾಗೂ 10(3)ನ್ನು ಓದಿಕೊಂಡಂತೆ, ಸದರಿ ನಿಯಮಾವಳಿಗಳ ನಿಯಮ 10(1)ಡಿ ಮತ್ತು 10(3)ರಡಿ ಪ್ರದತ್ತವಾದ ಅಧಿಕಾರದನ್ವಯ ಸದರಿ ಅಧಿಕಾರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿರಿಸಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕ ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಟಿ. ಎಸ್. ಸುಬ್ರಮಣ್ಯ, ಉಪ ನಿರ್ದೇಶಕ ಇವರು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮತಿಯಿಲ್ಲದೇ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಿವಶಂಕರ ನಾಯಕ್. ಎಲ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–4)

**PR. 353**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ವಿಧಾನ ಸಭೆ, ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಯಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ಒದಗಿಸಲು ಸೃಜಿಸಲಾಗಿದ್ದ 300 ತಾತ್ಕಾಲಿಕ ಹೊಸ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 177 ಆಪಿಸೇ 2009, ದಿ: 03.02.2010.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 235 ಶಿಸನೇ 2013, ದಿ: 02.12.2013. & ತಿದ್ದುಪಡಿ ದಿ: 21.01.2015.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 38 ಶಿಸನೇ 2014, ದಿನಾಂಕ: 28.05.2014.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಮಾನ್ಯ ಶಾಸಕರುಗಳಿಗೆ ಮತ್ತು ವಿಧಾನ ಪರಿಷತ್ ಸದಸ್ಯರುಗಳಿಗೆ ಒಬ್ಬ ಆಪ್ತ ಸಹಾಯಕರನ್ನು ನೇಮಕ ಮಾಡಿಕೊಳ್ಳಲು ಆದೇಶಿಸಲಾಗಿದೆ ಮೇಲೆ (2)ರಲ್ಲಿ ಓದಲಾಗಿರುವ ಆದೇಶದಲ್ಲಿ ಕರ್ನಾಟಕ ವಿಧಾನಸಭೆ /ವಿಧಾನ ಪರಿಷತ್‌ನ ಮಾನ್ಯ ಸದಸ್ಯರುಗಳಿಗೆ ಹೆಚ್ಚುವರಿಯಾಗಿ ಇನ್ನೊಬ್ಬ ಆಪ್ತ ಸಹಾಯಕರನ್ನು ಒದಗಿಸಲು ತೀರ್ಮಾನಿಸಿ ಅದರಂತೆ ಆದೇಶ ಹೊರಡಿಸಲಾಗಿದೆ. ಸದರಿ ಆದೇಶದಲ್ಲಿ ಈ ಹೆಚ್ಚುವರಿ ಆಪ್ತ

ಸಹಾಯಕರ ಸೇವೆಯನ್ನು ಕಂದಾಯ, ಆರೋಗ್ಯ ಶಿಕ್ಷಣ ಮತ್ತು ಪೊಲೀಸ್ ಇಲಾಖೆ, ವಾಣಿಜ್ಯ ತೆರಿಗೆ, ಅಬಕಾರಿ, ರಾಜ್ಯ ಲೆಕ್ಕಪತ್ರ ಮತ್ತು ಖಜಾನೆ ಇಲಾಖೆಗಳಲ್ಲಿರುವ ತಾಂತ್ರಿಕ ಸಿಬ್ಬಂದಿಯನ್ನು ಹೊರತುಪಡಿಸಿ 'ಸಿ'–ವೃಂದದ ಸಿಬ್ಬಂದಿಗಳನ್ನು ಮತ್ತು ಇನ್ನಿತರ ಇಲಾಖೆಗಳ 'ಸಿ'–ವೃಂದದ ಸಿಬ್ಬಂದಿಗಳನ್ನು ನೇಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಹಾಗೆಯೇ, ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಬಗ್ಗೆ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳನ್ವಯ ಅರ್ಹ ನಿವೃತ ನೌಕರರು ಮತ್ತು ಅರ್ಹ ಖಾಸಗಿ ವ್ಯಕ್ತಿಗಳನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಅನುಮೋದನೆ ನೀಡಲಾಗಿದೆ.

ಈ ಉದ್ದೇಶಕ್ಕಾಗಿ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ವಿಧಾನ ಸಭೆ ಮತ್ತು ಪರಿಷತ್ತಿನ ಮಾನ್ಯ ಸದಸ್ಯರಿಗೆ ಈಗ ಇರುವ ಒಬ್ಬ ಆಪ್ತ ಸಹಾಯಕರ ಜೊತೆಗೆ ಹೆಚ್ಚುವರಿಯಾಗಿ ಮತ್ತೊಬ್ಬ ಆಪ್ತ ಸಹಾಯಕರನ್ನು ನೇಮಿಸಿಕೊಳ್ಳಲು ಕೆಲವು ಷರತ್ತುಗಳಿಗೊಳಪಟ್ಟು 300 ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ. ಈ 300 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 28.05.2015ರಿಂದ ಇನ್ನೂ ಒಂದು ವರ್ಷದ ಅವಧಿಗೆ ಮುಂದುವರಿಸುವುದು ಅತ್ಯವಶ್ಯಕವೆಂದು ಸರ್ಕಾರವು ಮನಗಂಡು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ವಿಸಸೇ 2015 ಬೆಂಗಳೂರು, ದಿನಾಂಕ: 15.05.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಮಾನ್ಯ ಸದಸ್ಯರುಗಳಿಗೆ ಈಗ ಇರುವ ಒಬ್ಬ ಆಪ್ತ ಸಹಾಯಕರ ಜೊತೆಗೆ ಹೆಚ್ಚುವರಿಯಾಗಿ ಮತ್ತೊಬ್ಬ ಆಪ್ತ ಸಹಾಯಕರನ್ನು ನೇಮಿಸಿಕೊಳ್ಳಲು 300 ಹುದ್ದೆಗಳನ್ನು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಿರುವುದನ್ನು ದಿನಾಂಕ: 28.05.2015ರಿಂದ ಇನ್ನೂ ಒಂದು ವರ್ಷದ ಅವಧಿಗೆ ಮುಂದುವರಿಸಿದೆ.

ಈ 300 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಿ ಆದೇಶಿಸಲಾದ ದಿನಾಂಕ: 28.05.2014ರ ಸರ್ಕಾರದ ಆದೇಶದಲ್ಲಿ ನಿಗದಿಪಡಿಸಿರುವ ಷರತ್ತು ಮತ್ತು ನಿಬಂಧನೆಗಳು ಮುಂದುವರಿಯುತ್ತವೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ206/ವೆಚ್ಚ–12/2015, ದಿನಾಂಕ: 23.04.2015ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್. ಎಸ್. ಚನ್ನಬಸಪ್ಪ**

**PR. 428** ಸರ್ಕಾರದ ಅಧೀನ ಕಾರ್ಯದರ್ಶಿ

**SC. 100** ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ–1)

## ಆರ್ಥಿಕ ಸಚಿವಾಲಯ

**ವಿಷಯ:** **ರಾಜ್ಯದಲ್ಲಿನ ಪ್ರದೇಶಗಳ ಮರು ವರ್ಗೀಕರಣ ಮತ್ತು ರಾಜ್ಯ ಸರ್ಕಾರಿ ನೌಕರರ ಮನೆ ಬಾಡಿಗೆ ಭತ್ಯೆ ದರಗಳ ಪರಿಷ್ಕರಣೆ ಕುರಿತು.**

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಇ 7 ಎಸ್ಆರ್‌ಪಿ 2012, ದಿನಾಂಕ: 21.04.2012
2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 18 ಎಸ್ಆರ್‌ಪಿ 2012, ದಿನಾಂಕ: 19.10.2012
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 09 ಎಸ್ಆರ್‌ಪಿ 2013, ದಿನಾಂಕ: 18.03.2013
4. ಸರ್ಕಾರಿ ಆದೇಶ ಸಂಖ್ಯೆ: ಆಇ 5 ಎಸ್ಆರ್‌ಪಿ 2013, ದಿನಾಂಕ: 10.05.2013
5. ಸರ್ಕಾರಿ ಆದೇಶ ಸಂಖ್ಯೆ: ಆಇ 14 ಎಸ್ಆರ್‌ಪಿ 2013, ದಿನಾಂಕ: 02.09.2013

**ಪ್ರಸ್ತಾವನೆ:**

2011ರ ಅಧಿಕಾರಿ ವೇತನ ಸಮಿತಿಯ ಶಿಫಾರಸ್ಸುಗಳ ಆಧಾರದನ್ವಯ, ಈ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 21.04.2012ರ ಸರ್ಕಾರಿ ಆದೇಶದಲ್ಲಿ, ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ ರಾಜ್ಯದಲ್ಲಿನ ನಗರಗಳು/ಪಟ್ಟಣಗಳು ಮತ್ತು ಇತರೆ ಪ್ರದೇಶಗಳನ್ನು 2001ರ ಜನಗಣತಿಯ ಅಂಕಿ ಅಂಶಗಳ ಆಧಾರದ ಮೇಲೆ ನಾಲ್ಕು ವರ್ಗಗಳಾಗಿ ವರ್ಗೀಕರಿಸಲಾಗಿತ್ತು. ಮುಂದುವರೆದು, ಮೇಲೆ ಓದಲಾದ ಕ್ರ.ಸಂ.(5)ರಲ್ಲಿನ ದಿನಾಂಕ:02.09.2013ರ ಸರ್ಕಾರಿ ಆದೇಶದಲ್ಲಿ, ರಾಜ್ಯದಲ್ಲಿನ ನಗರಗಳು/ಪಟ್ಟಣಗಳು ಮತ್ತು ಇತರೆ ಪ್ರದೇಶಗಳನ್ನು ಎ, ಬಿ ಮತ್ತು ಸಿ ದರ್ಜೆಯ ಪ್ರವರ್ಗಗಳನ್ನಾಗಿ ಪುನರ್ ವರ್ಗೀಕರಿಸಲಾಗಿರುತ್ತದೆ.

ಮಾನ್ಯ ಮುಖ್ಯಮಂತ್ರಿಗಳು 2015–16ರ ಆಯವ್ಯಯ ಭಾಷಣದಲ್ಲಿ, ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ ರಾಜ್ಯದಲ್ಲಿನ ನಗರಗಳು ಹಾಗೂ ಗ್ರಾಮೀಣ ಪ್ರದೇಶಗಳನ್ನು 2011ರ ಜನಗಣತಿಯ ಅಂಕಿ–ಅಂಶಗಳ ಆಧಾರದ ಮೇಲೆ ಪುನರ್ ವರ್ಗೀಕರಿಸುವ ಸರ್ಕಾರದ ನಿರ್ಧಾರವನ್ನು ಘೋಷಿಸಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಆಇ 6 ಎಸ್ಆರ್‌ಪಿ 2015, ಬೆಂಗಳೂರು, ದಿನಾಂಕ:04.07.2015.**

ದಿನಾಂಕ: 02.09.2013ರ ಸರ್ಕಾರಿ ಆದೇಶ ಸಂಖ್ಯೆ: ಆಇ 14 ಎಸ್ಆರ್‌ಪಿ 2013ನ್ನು ರದ್ದುಪಡಿಸಿ, ಮನೆ ಬಾಡಿಗೆ ಭತ್ಯೆಯ ಉದ್ದೇಶಕ್ಕಾಗಿ, ರಾಜ್ಯದಲ್ಲಿನ ನಗರಗಳು/ಪಟ್ಟಣಗಳು ಮತ್ತು ಇತರೆ ಪ್ರದೇಶಗಳನ್ನು 2011ರ ಜನಗಣತಿಯ ಅಂಕಿ–ಅಂಶಗಳ ಆಧಾರದ ಮೇಲೆ ಈ ಕೆಳಗಿನಂತೆ ಮೂರು ಪ್ರವರ್ಗಗಳಾಗಿ ಪುನರ್ ವರ್ಗೀಕರಿಸಲು ಸರ್ಕಾರವು ಹರ್ಷಿಸುತ್ತದೆ ಮತ್ತು ಮನೆ ಬಾಡಿಗೆ ಭತ್ಯೆಯ ದರಗಳು ಅವುಗಳ ಮುಂದೆ ಸೂಚಿಸಿದಂತಿರತಕ್ಕದ್ದು.

| ಜನಸಂಖ್ಯೆ | ವರ್ಗೀಕರಣ | ಮನೆ ಬಾಡಿಗೆ ಭತ್ಯೆಯ ದರ ಮೂಲ ವೇತನದ ಶೇಕಡ |
|---|---|---|
| 25 ಲಕ್ಷ ಮತ್ತು ಅದಕ್ಕೂ ಹೆಚ್ಚು | ಎ | ಮೂಲ ವೇತನದ ಶೇಕಡ 30ರಷ್ಟು |
| 5 ಲಕ್ಷದಿಂದ 25 ಲಕ್ಷದವರೆಗೆ | ಬಿ | ಮೂಲ ವೇತನದ ಶೇಕಡ 20ರಷ್ಟು |
| 5 ಲಕ್ಷಕ್ಕಿಂತ ಕಡಿಮೆ | ಸಿ | ಮೂಲ ವೇತನದ ಶೇಕಡ 10ರಷ್ಟು |

2. ಈ ಮೇಲೆ ತಿಳಿಸಿರುವ ಮೂರು ವರ್ಗಗಳಡಿ ಬರುವ ಸ್ಥಳಗಳ ವಿವರಗಳು ಈ ಕೆಳಕಂಡಂತಿರುತ್ತವೆ.

**"ಎ" ವರ್ಗದ ನಗರ**

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ

(ದಿನಾಂಕ: 16.01.2007ರ ಸರ್ಕಾರಿ ಅಧಿಸೂಚನೆ ಸಂಖ್ಯೆ: ಯುಡಿಡಿ 92 ಎಂಎನ್‌ವೈ 2006ರಲ್ಲಿ ಅಧಿಸೂಚಿಸಿರುವ ಗಡಿ ಪ್ರದೇಶಗಳ ವ್ಯಾಪ್ತಿಯೊಳಗಿರುವ ಬಿಬಿಎಂಪಿ ಪ್ರದೇಶ)

**"ಬಿ" ವರ್ಗದ ನಗರಗಳು**

ಮೈಸೂರು ಮಹಾನಗರ ಪಾಲಿಕೆ,

ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆ

ಕಲಬುರಗಿ ಮಹಾನಗರ ಪಾಲಿಕೆ

ಬೆಳಗಾವಿ ಮಹಾನಗರ ಪಾಲಿಕೆ

ಮಂಗಳೂರು ಮಹಾನಗರ ಪಾಲಿಕೆ

**"ಸಿ" ವರ್ಗದ ನಗರಗಳು**

5 ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ಇತರೆ ಎಲ್ಲಾ ಪ್ರದೇಶಗಳು

3. ರಾಜ್ಯದಲ್ಲಿನ ನಗರಗಳು/ಪಟ್ಟಣಗಳು ಮತ್ತು ಇತರೆ ಪ್ರದೇಶಗಳ ವರ್ಗೀಕರಣವು ಮುಂದಿನ ಆದೇಶದವರೆಗೆ 2011ರ ಜನಗಣತಿಯ ಅಂಕಿ–ಅಂಶಗಳ ಆಧಾರದ ಮೇಲೆ ಇರತಕ್ಕದ್ದು.

4. ದಿನಾಂಕ: 19.10.2012ರಂದು ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ: ಆಇ 18 ಎಸ್‌ಆರ್‌ಪಿ 2012ರಲ್ಲಿ ಮನೆ ಬಾಡಿಗೆ ಭತ್ಯೆ ಮಂಜೂರಾತಿ ಕುರಿತಂತೆ ವಿಧಿಸಿರುವ ಇತರೆ ಎಲ್ಲಾ ನಿಬಂಧನೆಗಳು ಮುಂದುವರೆದು ಅನ್ವಯಿಸುತ್ತವೆ.

5. ಈ ಆದೇಶಗಳು 1ನೇ ಏಪ್ರಿಲ್ 2015 ರಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ವಿಶ್ವನಾಥ್**

ಸರ್ಕಾರದ ಉಪ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಸೇವೆಗಳು–2)

**FINANCE SECRETARIAT**

**Sub:** Re-classification of places in the State for the purpose of grant of House Rent Allowance to State Government employees -reg.

**Read:-**
1. G.O. No. FD 7 SRP 2012, dated: 21.04.2012
2. G.O. No. FD 18 SRP 2012, dated: 19.10.2012
3. G.O. No. FD 9 SRP 2013, dated: 18.03.2013
4. G.O. No. FD 5 SRP 2013, dated: 10.05.2013
5. G.O.No. FD 14 SRP 2013, dated: 02.09.2013

**PREAMBLE:-**

On the basis of the recommendations of the Official Pay Committee-2011, the Cities/Towns, and Other Places in the State were classified into four classes for the purpose of House Rent Allowance with reference to their population based on 2001 Census figures vide G.O. dated: 21.04.2012 read at (1) above. Further, the Cities/Towns and Other Places in the State were reclassified as A, B and C categories vide G.O.dated: 02.09.2013 read at (5) above.

The Hon'ble Chief Minister in the Budget Speech 2015-16 has announced the Government's decision to re-classify cities, towns and other places in the State on the basis of 2011 Census figures for the purpose of House Rent Allowance. Accordingly, the following orders are issued.

**GOVERNMENT ORDER NO. FD 6 SRP 2015, BENGALURU, DATED:04.07.2015.**

In supersession of the G.O. No. FD 14 SRP 2013 dated: 02.09.2013, Government are pleased to reclassify the Cities/Towns and Other Places in the State for the purpose of House Rent Allowance into three categories as hereunder with reference to the population based on 2011 Census figures and the rates of House Rent Allowance admissible shall be as indicated against them.

| Population | Classification | Rate of HRA as % of basic pay |
|---|---|---|
| 25 lakh and above | A | 30% |
| 5 lakh and above but less than 25 lakh | B | 20% |
| Less than 5 lakh | C | 10% |

2. The details of the places falling under each of the above three classifications are as under:-

**"A" Class City**

Bruhath Bengaluru Mahanagara Palike

(Places situated within the BBMP limits as notified in Notification No. UDD 92 MNY 2006, dated: 16.01.2007)

**"B" Class Cities**

Mysore Municipal Corporation

Hubli-Dharwad Municipal Corporation

Kalaburagi Municipal Corporation

Belagavi Municipal Corporation

Mangaluru Municipal Corporation

**"C" Class Cities**

All other places with a population of less than 5 lakh

3. The classification of Cities/Towns and Other Places in the State shall be on the basis of 2011 Census figures until further orders.

4. All other conditions stipulated in G.O. No. FD 18 SRP 2012 dated: 19.10.2012 for grant of House Rent Allowance shall continue to apply.

5. These orders shall come into effect from 1st April 2015.

By Order in the name of the Governor of Karnataka

**M. VISHWANATH**

Deputy Secretary to Government

Finance Department (Services-2)

**PR. 427**

**SC. 500**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಪೂರಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 1994; ದಿ: 07–07–1994.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 34 ಸಸಿವಿ 1999; ದಿ: 22–10–1999.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 173 ಸಉಸೇ 2014; ದಿ: 01–07–2014.
4. ಕೃ.ಭಾ.ಜ.ನಿ. ವಿಶೇಷ ಕೋಶ (ಜಲ ಸಂಪನ್ಮೂಲ ಇಲಾಖೆಯ)ಕಡತ ಸಂಖ್ಯೆ: ಜಸಂಇ 140 ಕೆಬಿಎನ್ 2015.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ: (1) ಮತ್ತು (2)ರ ಸರ್ಕಾರದ ಆದೇಶಗಳಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ಪ್ರಾರಂಭಿಕ ಕಾರ್ಯಗಳನ್ನು ನಿರ್ವಹಿಸಲು ಈ ಕೆಳಕಂಡ ಹುದ್ದೆಗಳನ್ನು ಒಳಗೊಂಡಂತೆ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶವನ್ನು ಸೃಜಿಸಲಾಗಿದೆ ಮತ್ತು ಪೂರಕ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಓದಲಾದ ಕ್ರಮಸಂಖ್ಯೆ: (3)ರ ಸರ್ಕಾರದ ಆದೇಶದಲ್ಲಿ ದಿ: 01.04.2014 ರಿಂದ 31.03.2015ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಕಡತದಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದ ವಿಶೇಷ ಕೋಶದಲ್ಲಿ ನಿಗಮದ ವ್ಯಾಪ್ತಿಗೆ ಒಳಪಡುವ ಕೃಷ್ಣಾ ಮೇಲ್ದಂಡೆ ಯೋಜನೆಗೆ ಸಂಬಂಧಿಸಿದ ಸಂಪೂರ್ಣ ಕಾರ್ಯನಿರ್ವಹಣೆಗಾಗಿ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳನ್ನು ಮುಂದುವರಿಸುವ ಅಗತ್ಯವಿದೆ ಎಂದು ಕೋರಿರುತ್ತಾರೆ. ಸದರಿ ಕಡತದಲ್ಲಿ ಕೋರಿರುವಂತೆ ಜಲಸಂಪನ್ಮೂಲ ಇಲಾಖೆಯ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶ ಹಾಗೂ ಪೂರಕ ಹುದ್ದೆಗಳನ್ನು ದಿ: 01.04.2015 ರಿಂದ 31.03.2016 ರವರೆಗೆ ಮುಂದವರೆಸುವಂತೆ ಕೋರಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕ | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರರು | 1 |
| 7 | ಬೆರಳಚ್ಚುಗಾರರು | 1 |
| 8 | ದಲಾಯತ್ | 1 |

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ಗ್ರೂಪ್–ಡಿ | 1 |

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 248 ಸಉಸೇ 2015 ಬೆಂಗಳೂರು, ದಿನಾಂಕ: 29ನೇ ಜೂನ್, 2015.**

ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿನ ಕೃಷ್ಣಾ ಭಾಗ್ಯ ಜಲ ನಿಗಮ ವಿಶೇಷ ಕೋಶವನ್ನು ಹಾಗೂ ಈ ಕೆಳಕಂಡ ಹುದ್ದೆಗಳನ್ನು ದಿ: 01.04.2015 ರಿಂದ 31.03.2016ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 1 |
| 2 | ವಿಶೇಷ ಕರ್ತವ್ಯಾಧಿಕಾರಿ (ಅಧೀನ ಕಾರ್ಯದರ್ಶಿ ಕೇಡರ್) | 1 |
| 3 | ಶಾಖಾಧಿಕಾರಿ | 1 |
| 4 | ಹಿರಿಯ ಸಹಾಯಕ | 2 |
| 5 | ಸಹಾಯಕ | 1 |
| 6 | ಶೀಘ್ರಲಿಪಿಗಾರರು | 1 |
| 7 | ಬೆರಳಚ್ಚುಗಾರರು | 1 |
| 8 | ದಲಾಯತ್ | 1 |

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ ಆಪ್ತ ಶಾಖೆ ಸಿಬ್ಬಂದಿ

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಶೀಘ್ರಲಿಪಿಗಾರರು | 1 |
| 2 | ಕಿರಿಯ ಸಹಾಯಕರು | 1 |
| 3 | ಗ್ರೂಪ್–ಡಿ | 1 |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 1996, ದಿ: 10.07.1996 ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

PR. 429

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಆಪ್ತ ಕಾರ್ಯದರ್ಶಿ (ಗ್ರೇಡ್–1) ಹುದ್ದೆಗಳ ಪೈಕಿ ಹನ್ನೆರಡು ಹುದ್ದೆಗಳನ್ನು ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗಳನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ ಮತ್ತು ಇತರರ ಮನವಿ, ದಿ: 09.03.2015.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 369 ಸಅಸೇ 2007 (ಭಾ), ದಿ: 07.07.2011
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 400 ಸಅಸೇ 2011(ಭಾ) ದಿ: 22.05.2013.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಮನವಿಯಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ ಮತ್ತು ಇತರ ಅಧಿಕಾರಿಯವರು ತಮ್ಮ ಮನವಿಯಲ್ಲಿ ಪ್ರಸ್ತುತ ಆಪ್ತ ಕಾರ್ಯದರ್ಶಿ (ಗ್ರೇಡ್–1)ವೃಂದದಲ್ಲಿ 23 ಹುದ್ದೆಗಳಿದ್ದು, ಈ ವೃಂದದಲ್ಲಿ ಕಾರ್ಯನಿರ್ವಹಿಸುತ್ತಿರುವ ಬಹುತೇಕ ಅಧಿಕೃತಗಳು ನಿವೃತ್ತಿ ಅಂಚಿನಲ್ಲಿರುತ್ತಾರೆ ಹಾಗೂ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿನ ಲೋಪದೋಷಗಳಿಂದ ಕೆಲವು ಅಧಿಕಾರಿಗಳು ಪ್ರತಿ 03 ವರ್ಷಗಳಿಗೊಮ್ಮೆ ಬಡ್ತಿ ಹೊಂದುತ್ತಿದ್ದು, ಒಂದೇ ತಂಡದಲ್ಲಿ ನೇಮಕಗೊಂಡ ಅಧಿಕಾರಿ ವೃಂದದ ಬಡ್ತಿಯಲ್ಲಿ ತಾರತಮ್ಯ ಉಂಟಾಗಿರುತ್ತದೆಂದು ತಿಳಿಸಿರುತ್ತಾರೆ. ಆದ್ದರಿಂದ ಹಾಲಿ ಆಪ್ತ ಕಾರ್ಯದರ್ಶಿ(ಗ್ರೇಡ್–1) ವೃಂದದಲ್ಲಿನ 23 ಹುದ್ದೆಗಳ ಪೈಕಿ 12 ಹುದ್ದೆಗಳನ್ನು ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ ನಿವೃತ್ತಿ ಅಂಚಿನಲ್ಲಿರುವ ಅಧಿಕಾರಿಗಳಿಗೆ ನ್ಯಾಯ ಒದಗಿಸುವಂತೆ ಕೋರಿರುತ್ತಾರೆ. ಆದರೆ ಆಪ್ತ ಕಾರ್ಯದರ್ಶಿ(ಗ್ರೇಡ್–1)ವೃಂದದಲ್ಲಿ ಮಂಜೂರಾದ ಹುದ್ದೆಗಳ ಸಂಖ್ಯೆ: 23 ಮಾತ್ರ.

ಆದ್ದರಿಂದ, ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 269 ಸಉಸೇ 2014, ಬೆಂಗಳೂರು, ದಿ: 08.07.2015.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಆಪ್ತ ಕಾರ್ಯದರ್ಶಿ (ಗ್ರೇಡ್–1) 23 ಹುದ್ದೆಗಳ ಪೈಕಿ 12 ಹುದ್ದೆಗಳನ್ನು ವೇತನ ಶ್ರೇಣಿ ರೂ. 48,900–1200–52500–1350–60600–1500–63,600ರ ಹಿರಿಯ ಆಪ್ತ ಕಾರ್ಯದರ್ಶಿ ಹುದ್ದೆಗೆ ತಾತ್ಕಾಲಿಕವಾಗಿ ಉನ್ನತೀಕರಿಸಿ ಆದೇಶಿಸಿದೆ.

ಮುಂದುವರೆದು, ಉನ್ನತೀಕರಿಸಿದ ಹುದ್ದೆಯಲ್ಲಿ ಬಡ್ತಿ ಹೊಂದುವ 12 ಅಧಿಕಾರಿಗಳು ನಿವೃತ್ತಿ ಹೊಂದುವವರೆಗೆ ಮಾತ್ರ ಈ ಹುದ್ದೆಗಳು ಜಾರಿಯಲ್ಲಿದ್ದು, ತದನಂತರ ಆಪ್ತ ಕಾರ್ಯದರ್ಶಿ (ಗ್ರೇಡ್–1) ವೃಂದದ ಹುದ್ದೆಗಳಾಗಿ ನಿಮ್ನೀಕರಿಸಲ್ಪಡುತ್ತವೆ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 330 ವೆಚ್ಚ–12/2015, ದಿ: 12.06.2015ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

**PR. 430**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2015–16ನೇ ಶೈಕ್ಷಣಿಕ ಸಾಲಿನಲ್ಲಿ ಡಾ॥ ಚಾರಿಣಿ ಎಂ. ಎ., ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಹೊಗಳಗೆರೆ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ ಅವರನ್ನು ಎಂ. ಪಿ. ಹೆಚ್. ವ್ಯಾಸಂಗಕ್ಕೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಅವರ ಪತ್ರ ಸಂಖ್ಯೆ: ಬಿಇಸಿ/ಜೆಆರ್‌ಓ(ಎಂ)7/2015–16 ದಿ: 29/06/2015

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ॥ ಚಾರಿಣಿ ಎಂ. ಎ., ವೈದ್ಯಾಧಿಕಾರಿ, ಪ್ರಾ. ಆ. ಕೇಂದ್ರ, ಹೊಗಳಗೆರೆ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ, ಅವರು 2015–16ನೇ ಶೈಕ್ಷಣಿಕ ಸಾಲಿನಲ್ಲಿ ನಿಮ್ಹಾನ್ಸ್‌ನಲ್ಲಿ ಪ್ರಾರಂಭವಾಗಲಿರುವ ಎರಡು ವರ್ಷಗಳ ಎಂ. ಪಿ. ಹೆಚ್ ವ್ಯಾಸಂಗಕ್ಕಾಗಿ ಇಲಾಖೆಯ ಮುಖಾಂತರ ಪ್ರವೇಶ ಪರೀಕ್ಷೆಯ ಅರ್ಜಿಗಳನ್ನು ಸಲ್ಲಿಸಿ ಅರ್ಹತೆಯನ್ನು ಪಡೆದಿರುತ್ತಾರೆ. ಈ ವೈದ್ಯಾಧಿಕಾರಿಯು 5 ವರ್ಷಗಳ ಸೇವೆಯನ್ನು ಪೂರೈಸಿದ್ದು, ಖಾಯಂ ಪೂರ್ವ ಸೇವೆಯನ್ನು ತೃಪ್ತಿಕರವೆಂದು ಘೋಷಿಸಲಾಗಿರುತ್ತದೆ. ಅವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲವಾದ್ದರಿಂದ ಸದರಿ ವೈದ್ಯರನ್ನು ಎರಡು ವರ್ಷಗಳ ಎಂ. ಪಿ. ಹೆಚ್. ವ್ಯಾಸಂಗಕ್ಕೆ ನಿಯೋಜಿಸುವಂತೆ ಆಯ್ತುಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿದ್ದಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಕಂಷವಾಗಿ ಪರಿಶೀಲಿಸಲಾಯಿತು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು ರಾಜ್ಯ ಮತ್ತು ಕೇಂದ್ರ ಸರ್ಕಾರಗಳಡಿಯಲ್ಲಿನ ಹಲವಾರು ಸಾರ್ವಜನಿಕ ಆರೋಗ್ಯ ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿರುತ್ತದೆ. ಸದರಿ ಕಾರ್ಯಕ್ರಮಗಳ ನಿರ್ವಹಣೆಗಾಗಿ ಆಡಳಿತಾತ್ಮಕ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುವ ವೈದ್ಯಾಧಿಕಾರಿಗಳು ಸಾರ್ವಜನಿಕ ಆರೋಗ್ಯ ವಿಷಯದಲ್ಲಿ ಪರಿಣತಿ ಹೊಂದಿರುವುದು ಅವಶ್ಯವಿರುವುದನ್ನು ಮನಗಂಡು ಡಾ॥ ಚಾರಿಣಿ ಎಂ. ಎ., ಅವರನ್ನು ಎಂ. ಪಿ. ಹೆಚ್. ವ್ಯಾಸಂಗಕ್ಕೆ ನಿಯೋಜಿಸಲು ಸರ್ಕಾರವು ನಿರ್ಧರಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 282 ಹೆಚ್‌ಎಸ್‌ಹೆಚ್ 2015 ಬೆಂಗಳೂರು, ದಿನಾಂಕ: 08/07/2015**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ಅಪೆಂಡಿಕ್ಸ್–II "ಎ' ನಿಯಮ ರನ್ವಯ ಈ ಕೆಳಕಂಡ ಷರತ್ತುಗಳನ್ನು ಒಪ್ಪಿ ಬಂಧಪತ್ರವನ್ನು ಸಲ್ಲಿಸುವ ನಿಬಂಧನೆಗೆ ಒಳಪಟ್ಟು, ಡಾ॥ ಚಾರಿಣಿ ಎಂ. ಎ., ವೈದ್ಯಾಧಿಕಾರಿ, ಪ್ರಾ. ಆ ಕೇಂದ್ರ, ಹೊಗಳಗೆರೆ, ಶ್ರೀನಿವಾಸಪುರ ತಾಲ್ಲೂಕು, ಕೋಲಾರ ಜಿಲ್ಲೆ ಅವರನ್ನು 2015–16ನೇ ಶೈಕ್ಷಣಿಕ ಸಾಲಿನಲ್ಲಿ ಬೆಂಗಳೂರಿನ ನಿಮ್ಹಾನ್ಸ್‌ನಲ್ಲಿ ಪ್ರಾರಂಭವಾಗಲಿರುವ ಎರಡು ವರ್ಷಗಳ ಎಂ. ಪಿ. ಹೆಚ್. ಸ್ನಾತಕೋತ್ತರ ವ್ಯಾಸಂಗಕ್ಕೆ ಸೇವಾನಿರತವಾಗಿ ಪ್ರತಿ ನಿಯೋಜನಾ ಸೌಲಭ್ಯದೊಂದಿಗೆ ನಿಯೋಜಿಸಿದೆ.

(1) ಈ ವ್ಯಾಸಂಗದ ನಂತರ ಕನಿಷ್ಠ 10 ವರ್ಷಗಳ ಕಾಲ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸೇವೆ ಸಲ್ಲಿಸುವುದು ಹಾಗೂ ಈ ಅವಧಿಯಲ್ಲಿ ಸ್ವಯಂ ನಿವೃತ್ತಿ ಹೊಂದಲು ಅವಕಾಶವಿರುವುದಿಲ್ಲ.

(2) ತಮ್ಮ ವಿದ್ಯಾರ್ಹತೆಗೆ ತಕ್ಕಂತೆ ಹೊಸ ಹುದ್ದೆ ಸೃಜಿಸಬೇಕೆಂದು ಯಾವುದೇ ಮನವಿ/ಪ್ರಸ್ತಾವನೆ ಸಲ್ಲಿಸತಕ್ಕದ್ದಲ್ಲ.

(3) ವ್ಯಾಸಂಗದ ನಂತರ ಅನ್ಯ ಇಲಾಖೆ/ಮಂಡಳಿ/ನಿಗಮಗಳಿಗೆ (ವೈದ್ಯಕೀಯ ಶಿಕ್ಷಣ ಇಲಾಖೆ ಸೇರಿದಂತೆ) ನಿಯೋಜನೆ ಮೇಲೆ ಕಳುಹಿಸುವಂತೆ ಕೋರಿಕೆ ಸಲ್ಲಿಸಲು ಅವಕಾಶವಿಲ್ಲ.

(4) ಸದರಿ ವ್ಯಾಸಂಗಕ್ಕಾಗಿ ಕರ್ತವ್ಯದಿಂದ ಬಿಡುಗಡೆ ಹೊಂದುವುದಕ್ಕಿಂತ ಮೊದಲು ಮೇಲ್ಕಂಡ ಅಂಶಗಳನ್ನೊಳಗೊಂಡಂತೆ ದಂಡ ಕರಾರು ಪತ್ರ (ಪೆನಾಲ್ಟಿ ಬಾಂಡ್) ಮತ್ತು ಕೆ.ಸಿ.ಎಸ್.ಆರ್. ನಿಯಮ ಅಪೆಂಡಿಕ್ಸ್– II (ಎ) ರನ್ವಯ ನಮೂನೆ–19, 19–ಎ ಹಾಗೂ **Obligation Bond** ನ್ನು ಸಲ್ಲಿಸತಕ್ಕದ್ದು.

ಈ ವೈದ್ಯಾಧಿಕಾರಿಯು ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಯಿಂದ ವ್ಯಾಸಂಗಕ್ಕೆ ಬಿಡುಗಡೆಗೊಳ್ಳುವ ಸಂದರ್ಭದಲ್ಲಿ ಹುದ್ದೆಯ ಕಾರ್ಯಭಾರವನ್ನು ಸಂಬಂಧಪಟ್ಟವರಿಗೆ ವಹಿಸಿ ನಿಯಂತ್ರಣಾಧಿಕಾರಿಗಳ ಮೂಲಕ ಚಲನಾದೇಶ ಮತ್ತು ಸಿ.ಟಿ.ಸಿ ಮೇಲಿನಂತೆ ನಮೂನೆ 19ರ ಬಂಧಪತ್ರ, ಪೆನಾಲ್ಟಿ ಬಾಂಡ್ ಹಾಗೂ **Obligation Bond** ನ್ನು ಆಯುಕ್ತಾಲಯಕ್ಕೆ ಮುದ್ದಾಂ ಸಲ್ಲಿಸಿದ ನಂತರ ವ್ಯಾಸಂಗಕ್ಕೆ ಹಾಜರಾಗುವುದು ಹಾಗೂ ಸಂಬಂಧಪಟ್ಟ ಕಾಲೇಜಿನಲ್ಲಿ ಹಾಜರಾದ ಬಗ್ಗೆ ಸಿ.ಟಿ.ಸಿಯನ್ನು ಸಹ ಆಯುಕ್ತಾಲಯಕ್ಕೆ ಸಲ್ಲಿಸುವುದು.

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವಗಳು, ಇವರು ಕರ್ನಾಟಕ ಸರ್ಕಾರಿ ಸೇವಾ ನಿಯಮಗಳಲ್ಲಿ ನಿಗದಿಪಡಿಸಿರುವಂತೆ ನಮೂನೆ–19 ರನ್ವಯ ಅಫಿಡವಿಟ್, ಪೆನಾಲ್ಟಿ ಬಾಂಡ್ ಮತ್ತು **Obligation Bond** ನ್ನು ಪಡೆದು ನಂತರ ಕೋರ್ಸಿಗೆ ಆಯ್ಕೆಯಾಗಿರುವ ಸೇವಾನಿರತ ವೈದ್ಯಾಧಿಕಾರಿಯನ್ನು ಕರ್ತವ್ಯದಿಂದ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 02 ಎಸ್‌ಆರ್‌ಎ 08 ದಿ: 05.06.2008 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೆ. ರಾಮಚಂದ್ರ**

ಸರ್ಕಾರದ ಉಪ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**PR. 431**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59